# ವಿಜಯನಗರ ಕಾಲದಲ್ಲಿ ದಕ್ಷಿಣ ಕನ್ನಡದ ವ್ಯವಸಾಯಿಕ ಪದ್ಧತಿಯಲ್ಲಿ ಆರುವಾರ

—ಬಿ. ಜಗದೀಶ ಶೆಟ್ಟಿ

ಕರಾವಳಿ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಜಯನಗರ ಕಾಲದಲ್ಲಿ ಪ್ರಚಲಿತವಿದ್ದ ವಿವಿಧ ಆರುವಾರ ಪದ್ಧತಿಗಳ ಅಧ್ಯಯನವೇ ಈ ಪ್ರಬಂಧದ ಮುಖ್ಯ ಉದ್ದೇಶ. ಈ ಪ್ರಬಂಧ ರಚನೆಗೆ ಪ್ರಮುಖ ಆಧಾರ ಶಾಸನಗಳು.

ವಿಜಯನಗರ ಕಾಲದ ಶಾಸನಗಳಲ್ಲಿ ಹಣದ ಅವಶ್ಯಕತೆಯನ್ನು ಪೂರೈಸುವುದಕ್ಕಾಗಿ ಅನೇಕ ರೀತಿಯ ಆರುವಾರ ಪದ್ಧತಿಯ ಅಡವು ವಿಧಾನಗಳನ್ನು ಕಾಣಬಹುದು. ವಿಜಯನಗರ ಕಾಲದ ಶಾಸನಗಳಲ್ಲಿ ಹಲವು ಬಾರಿ ಉಲ್ಲೇಖಿಸಲ್ಪಟ್ಟಿರುವುದರಿಂದ ಅವುಗಳು ಬಹಳಷ್ಟು ಪ್ರಚಾರ ಪಡೆದಿದ್ದವೆಂದು ನಿಶ್ಚಯಿಸಬಹುದು. ಆರುವಾರ ಶಾಸನಗಳಲ್ಲಿ ಕಾಣುವ ಅತೀ ಪ್ರಸಿದ್ಧಿಯಾದ ಭೂ ಅಡವು ಪದ್ಧತಿಯಾಗಿದೆ. ಕಿಟ್ಟೆಲ್ ಅವರ ಪ್ರಕಾರ "ಸ್ವಾಧೀನದೊಂದಿಗೆ ಮಾಡುವ ಭೂ ಅಡವು ಕ್ರಮ ಆರುವಾರ ಎಂದೆನಿಸಿಕೊಳ್ಳುತ್ತದೆ"[1] ಆರುವಾರವನ್ನು "ಭೂಮಿಯನ್ನು ಪರಭಾರೆ ಮಾಡುವುದರೊಂದಿಗೆ ಮಾಡುವ ಭೂಅಡವು ಕ್ರಮ–ಅನುಭವದ ಹಕ್ಕಿನೊಂದಿಗೆ ಅಡವು"[2] ಎಂದೂ ವಿವರಿಸಲಾಗಿದೆ. ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವಲ್ ಆರುವಾರವನ್ನು ಸ್ಪಷ್ಟವಾಗಿ ವಿವರಿಸುತ್ತಾ "ಸ್ವಾಧೀನತೆಯೊಂದಿಗಿನ ಭೂಅಡವು ಆರುವಾರವೆಂದು ಕರೆಯಲ್ಪಡುವುದು"[3] ಎಂದಿದೆ.

ಹೀಗೆ ಆರುವಾರವನ್ನು ಒಂದು ಭೂಅಡವು ಕ್ರಮವಾಗಿ ಈ ಕೆಳಗಿನಂತೆ ವಿವರಿಸಬಹುದು. ಹಣವನ್ನು ಸ್ವೀಕರಿಸಿದ ನಂತರ ಹಣ ಕೊಟ್ಟವನಿಗೆ ಭೂಮಿಯನ್ನು ಹಸ್ತಾಂತರಿಸಿ ಮಾಡುವ ಭೂಅಡವು ಕ್ರಮವನ್ನು ಆರುವಾರವೆನ್ನಬಹುದು. ಈ ರೀತಿಯ ಅಡವು ಪದ್ಧತಿಯಲ್ಲಿ ಕೊಟ್ಟ ಹಣಕ್ಕೆ ಪೂರ್ಣ ಜವಾಬ್ದಾರಿ ಇದೆ. ಏಕೆಂದರೆ ಹಣಕ್ಕೆ ಭದ್ರತೆ ನೀಡಿದ ಭೂಮಿ ಹಣ ಕೊಟ್ಟವನಿಗೆ ಹಸ್ತಾಂತರಿಸಲ್ಪಡುತ್ತದೆ ಮಾತ್ರವಲ್ಲ, ಅವನೇ ಅದನ್ನು ಅನುಭವಿಸಿಕೊಂಡು ಬರುತ್ತಾನೆ. ಆದುದರಿಂದ ಆರುವಾರ ಒಂದು ಭೂಅಡವು ಕ್ರಮ ಎಂಬ ಅಂಶ ಶಾಸನಗಳಲ್ಲಿ ವಿವರಿಸಲ್ಪಟ್ಟಿರುವುದರಿಂದ ಆರುವಾರ ಎಂದರೆ ತೆರಿಗೆ ಎಂಬ ವಾದವನ್ನು ಒಪ್ಪುವುದು ಕಷ್ಟವಾಗುತ್ತದೆ.[4]

---

1 Kittil : *Kannada English Dictionary Revised and Enlarged Edition* vol I (Madras 1968) p. 168
2 Rao Narasinga Ullal : *A Kissamwar glossary of Kannada words*. (Delli 1985) P. 49
3 Sturroek J. : *Madras District Mannuals South kanara* Vol. I (Madras 1894) P. 130
4 Ramesh K. V. : *A History of south Kanara* (Dharwar 1970) P. 279

ಕುಂದಾಪುರ ತಾಲೂಕು ಬಸ್ರೂರಿನ ಒಂದು ಶಾಸನ ಮನೆಯು ಜಾಗ, ಮರಗಳು, 9 ನಾಗಂಡುಗ ಮೂಡೆ ಜಾಗ ಮತ್ತು ಅವುಗಳ ಉತ್ಪತ್ತಿ ಸೇರಿ 100 ವರಹ ಗದ್ಯಾಣಗಳನ್ನು ಪಡೆದು ಅಡವು ಮಾಡಿದ ವಿಷಯವನ್ನು ತಿಳಿಸುತ್ತದೆ.[5] ಮೇಲಿನ ಶಾಸನದಲ್ಲಿ ಹಣ ಪಡೆದುಕೊಂಡವನು ಹಣ ಕೊಟ್ಟವನಿಗೆ ಭೂಮಿಯೊಂದಿಗೆ ಅದಕ್ಕೆ ಸಂಬಂಧಿಸಿದ ಎಲ್ಲಾ ಸೌಕರ್ಯಗಳನ್ನು ಹಸ್ತಾಂತರಿಸಿದುದನ್ನು ತಿಳಿಸುತ್ತದೆ. ಈ ರೀತಿ ಮಾಡಿದುದರಿಂದ ಭೂಮಿ ಪಡೆದುಕೊಂಡವನಿಗೆ ಅದರ ಪ್ರಯೋಜನವನ್ನು ಸಂಪೂರ್ಣವಾಗಿ ಪಡೆಯಲು ಸಹಾಯವಾದಂತಾಯಿತು.

ಬಸ್ರೂರಿನ ಕ್ರಿ.ಶಕ 1524ರ ಶಾಸನ ಆರುವಾರ ಸಾಲವಾಗಿ ಕೊಟ್ಟ 100 ಗದ್ಯಾಣ ಹಣಕ್ಕೆ 10 ಮೂಡೆ ಅಕ್ಕಿಯನ್ನು ಬಡ್ಡಿಯಾಗಿ ತೆಗೆದುಕೊಂಡ ವಿಷಯವನ್ನು ತಿಳಿಸುತ್ತದೆ.[6] ಮೇಲೆ ಹೇಳಿದ ಶಾಸನದಿಂದ ಹಾಗೂ ಇತರ ಶಾಸನಗಳಿಂದ ನಮಗೆ ತಿಳಿಯುವುದೇನೆಂದರೆ, ಸಾಮಾನ್ಯವಾಗಿ ಆರುವಾರ ಸಾಲಕ್ಕೆ ನಿಗದಿಪಡಿಸುತ್ತಿದ್ದ ಬಡ್ಡಿಯ ದರ ಶೇಕಡಾ 10. ಇಲ್ಲಿನ ಒಂದು ವಿಶೇಷತೆಯೆಂದರೆ ಹಲವಾರು ಶಾಸನಗಳು ಆರುವಾರದ ಬಗ್ಗೆ ತಿಳಿಸಿದರೂ ಸಹ, ಒಂದು ಮೂಡೆ ಭೂಮಿಯ ಮೇಲೆ ಸಾಮಾನ್ಯವಾಗಿ ಎಷ್ಟು ಹಣವನ್ನು ಸಾಲವಾಗಿ ನೀಡುತ್ತಿದ್ದರು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಅಂದರೆ ಸಾಲದ ಮೊತ್ತವನ್ನು ನಿಗದಿಪಡಿಸುವಲ್ಲಿ, ಹಲವಾರು ವಿಷಯಗಳನ್ನು ಗಮನಕ್ಕೆ ತೆಗೆದುಕೊಳ್ಳುತ್ತಿದ್ದರು. ಭೂಮಿಯ ಫಲವತ್ತತೆ, ನೀರಿನ ಸೌಕರ್ಯ, ಭೂಮಿಯಲ್ಲಿ ಒತ್ತೆ ಇಟ್ಟುಕೊಂಡವನಿಗೆ ಇರುವ ಆಸಕ್ತಿ ಹಾಗೂ ಇತರ ವಿಷಯಗಳು ಹೆಚ್ಚಾಗಿ ಸಾಲದ ಮೊತ್ತ ನಿಗದಿಪಡಿಸುವಲ್ಲಿ ಗಮನಕ್ಕೆ ತೆಗೆದುಕೊಳ್ಳುವ ವಿಷಯಗಳು. ಅಂತೆಯೇ ಎಲ್ಲಾ ವರ್ಗದ ಭೂಮಿಯನ್ನು ಸಾಲಕ್ಕೆ ಒಳಪಡಿಸುತ್ತಿದ್ದರು. ತೋಟವನ್ನು ಕೂಡಾ ಆರುವಾರಕ್ಕೊಳಪಡಿಸುತ್ತಿದ್ದರು.[7]

ನಮಗೆ ಲಭ್ಯವಿರುವ ಧಾರಗಳು ಈ ರೀತಿಯ ಅಡವು ಮಾಡುವಾಗ ತಯಾರಿಸುವ ಕಾಗದ ಪತ್ರಗಳ ಬಗ್ಗೆಯೂ ಹೇಳುತ್ತವೆ. ಹೀಗೆ ತಯಾರಿಸುವ ಕಾಗದ ಪತ್ರಕ್ಕೆ 'ಆರುವಾರ ಪತ್ರ' ಎಂದು ಹೆಸರು.[8] ಆರುವಾರಕ್ಕೆ ಸಂಬಂಧಿಸಿದ ಎಲ್ಲಾ ನಿಯಮಗಳನ್ನು ಅಲ್ಲಿ ವಿವರವಾಗಿ ನಮೂದಿಸುವ ಕ್ರಮವಿತ್ತು. ಒಂದು ಶಾಸನ ಆರುವಾರ ಮಾಡುವುದಕ್ಕೆ ಸಂಬಂಧಿಸಿದ ಕಾರಣವನ್ನು ಹಾಗೂ ಇತರ ವಿಷಯಗಳನ್ನು ತಿಳಿಸುತ್ತದೆ.[9] ಆರುವಾರ ವ್ಯವಹಾರದಲ್ಲಿ ವ್ಯಕ್ತಿಗಳು ಮಾತ್ರವಲ್ಲ, ಸಂಸ್ಥೆಗಳು ಸಹ ಪಾಲುಗೊಳ್ಳುತ್ತಿದ್ದವು ಹಾಗೂ ಹಣವನ್ನು ಸಾಲವಾಗಿ ನೀಡುತ್ತಿದ್ದವು.[10]

ಆರುವಾರದಲ್ಲಿ ಹಲವು ವಿಧಗಳಿವೆ. ಅವುಗಳು ಯಾವುವೆಂದರೆ ಅರ್ಧಾರುವಾರ,[11] ಅಂತರಾರುವಾರ[12] ಮತ್ತು ಬಿಡಾರುವಾರ.[13] ಹೆಸರೇ ಸೂಚಿಸುವಂತೆ ಅರ್ಧಾರುವಾರು ಎಂದರೆ ಅರ್ಧ ಆರುವಾರ. ಆದರೆ ಈಗ ನಮಗೆ ಲಭ್ಯವಿರುವ ಆಧಾರಗಳ ಸಹಾಯದಿಂದ, ಅರ್ಧಾರುವಾರಕ್ಕೆ ಸಂಬಂಧಿಸಿದ ರೀತಿ, ನಿಯಮಗಳನ್ನು

---

5 511 vol IX : Pt II : No. 517
6 *Ibid*
7 *Ibid*
8 *Ibid* No. 446
9 *Ibvd* No. 460
10 Mudabidre Copper Plate Inscripition (In the Possession of Swamije of Jaian Mutt Mudabidre)
11 S.I.I. vol IX pt II: Nos 470; 471
12 *Abid* No· 512
13 *Abid*

ವಿವರವಾಗಿ ಹೇಳುವುದು ಕಷ್ಟ. ಅದನ್ನು ನಾವು ಹೇಗೆ ವಿವರಿಸಬಹುದೆಂದರೆ, ಭೂಮಿಯ ಭದ್ರತೆಯ ಮೇಲೆ ಆರುವಾರವಾಗಿ ಸಾಲತೆಗೆದುಕೊಂಡವ, ಆರುವಾರ ಮಾಡಿದ ಎಲ್ಲಾ ಭೂಮಿಯನ್ನು ಪರಭಾರೆ ಮಾಡದೆ ಅದರಲ್ಲಿ ಒಂದು ಭಾಗವನ್ನು ಮಾತ್ರ ತೆಗೆದುಕೊಂಡ ಹಣದ ಬಡ್ಡಿಗಾಗಿ ಪರಭಾರೆ ಮಾಡಿದರೆ ಹಾಗೂ ಉಳಿದ ಭಾಗ ಭದ್ರತೆ ಆಗಿದ್ದರೆ ಅದು ಅರ್ಧಾರುವಾರ ಎನಿಸಿ ಕೊಳ್ಳುವುದು.

ಅಂತರಾರುವಾರ ಎಂದರೆ "ಆರುವಾರ ಪದ್ಧತಿ ಯಂತೆ ಸಾಲ ತೆಗೆದುಕೊಂಡ ನಂತರ, ಇನ್ನೂ ಹೆಚ್ಚಿನ ಹಣ ಬೇಕಿದ್ದಲ್ಲಿ ಆಗ ಅಂತರಾರುವಾರ ಪದ್ಧತಿಯಂತೆ ಹಣ ತೆಗೆದುಕೊಳ್ಳಬಹುದು."[14] ಶಾಸನಗಳನ್ನು ಕೂಲಂಕಷ ವಾಗಿ ಪರಿಶೀಲಿಸಿದಲ್ಲಿ ಅಂತರಾರುವಾರವೆಂದಲ್ಲಿ ದ್ವಿತೀಯ ಬಾರಿಗೆ ಆರುವಾರಕ್ಕೊಳಪಡಿಸುವುದಲ್ಲ, ಬದಲಾಗಿ ಭೂಮಿಯನ್ನು ಅನುಭವಿಸುವ ಹಕ್ಕನ್ನು ಇನ್ನೊಬ್ಬನಿಗೆ ಹಸ್ತಾಂತರಿಸುವುದು (ಅಂದರೆ ಯಾವನು ಹಣವನ್ನು ನೀಡುತ್ತಾನೋ ಅವನಿಗೆ) ಎಂಬ ವಿಷಯ ಸ್ಪಷ್ಟವಾಗು ವುದು. ಇಲ್ಲಿ ಮೂಲ ಹಕ್ಕು ಮೂಲ ಅನುಭವದಾರನ ಹತ್ತಿರ ಇರುತ್ತದೆ.[15]

ಆರುವಾರದಲ್ಲಿ ಇನ್ನೊಂದು ವಿಧ ಬಿಡಾರುವಾರ. ಇದುವರೆಗಿನ ಅಭಿಪ್ರಾಯ ಎಂದರೆ 'ಬಿಡು' ಬೀಳು ಭೂಮಿ ಅಥವಾ ಬೇಸಾಯ ಮಾಡದೆ ಬಿಟ್ಟಿರುವ ಭೂಮಿ ಎಂದರ್ಥ. ಬಿಡಾರುವಾರವೆಂದರೆ ಬೇಸಾಯ ಯೋಗ್ಯವಾದ, ಆದರೆ ಬೇಸಾಯ ಮಾಡದೆ ಆರುವಾರ ವಾಗಿ ಬಿಟ್ಟ ಭೂಮಿಯ ಮೇಲೆ ವಿಧಿಸುವ ತೆರಿಗೆ.[16] ಆದರೆ ಅದು ಒಪ್ಪತಕ್ಕ ವಾದವಲ್ಲ. ಅದು ಬೇಸಾಯ ಮಾಡದ ಭೂಮಿಯ ಮೇಲೆ ವಿಧಿಸುವ ತೆರಿಗೆ ಅಲ್ಲ. ಶಾಸನಗಳಲ್ಲಿ ಕಂಡುಬರುವ 'ಬಿಡಾರುವಾರವಾಗಿ ಬಿಟ್ಟು ಕಡಂಗೊಂಡ'[17] ಮತ್ತು 'ಯಿ ಬಾಳ ಬಿಡಾರುವಾರವಾಗಿ ಬಿಟ್ಟು ಕಡಂಗೊಂಡದು ದೊಡ್ಡ ವರಹ 28'[18] ಮುಂತಾದ ವಿವರಗಳು ಬಿಡಾರುವಾರವೆಂದರೆ ಒಂದು ಅಡವು ಕ್ರಮ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತವೆ. ಇಲ್ಲಿ ನಾವು ಗಮನಿಸಬೇಕಾದ ಅಂಶ ಏನೆಂದರೆ, ಬಿಡಾರು ವಾರದಲ್ಲಿ ಹಣವನ್ನು ಸಾಲವಾಗಿ ನೀಡಿ ಭೂಮಿಯನ್ನು ವಶಕ್ಕೆ ತೆಗೆದುಕೊಂಡ ವ್ಯಕ್ತಿ ಸ್ವಲ್ಪ ಸಮಯದ ನಂತರ ಭೂಮಿಯನ್ನು ಹಿಂದಕ್ಕೆ ಕೊಡಬೇಕು. ಭೂಮಿಯ ಮೂಲ ವಾರಸುದಾರ, ತಾನು ತೆಗೆದುಕೊಂಡ ಹಣಕ್ಕಿಂತ ಮೂರು ಪಾಲು ನೀಡಿ ಭೂಮಿಯನ್ನು ವಾಪಾಸು ಪಡೆ ಯುವ ಅವಕಾಶ ಬಿಡಾರುವಾರದಲ್ಲಿ ಇದೆ. ಅಂದರೆ ಬಿಡಾರುವಾರದಲ್ಲಿಯೂ ಭೂಮಿ ಪರಬಾರೆ ಮಾಡ ಬೇಕಾಗುತ್ತದೆ.[19] ಅಲ್ಲದೆ ಭೂಮಿಯೊಂದಿಗೆ ಅದಕ್ಕೆ ಸಂಬಂಧಿಸಿದ ಎಲ್ಲಾ ಸೌಕರ್ಯಗಳನ್ನು ಸಹ ಪರಬಾರೆ ಮಾಡುವ ಕ್ರಮವಿತ್ತು.[20] ಬಿಡಾರುವಾರವನ್ನು ಸಹ ಉತ್ತಮ ನೀತಿಯಲ್ಲಿ ದಾಖಲೆ ಮಾಡಿದ ಬಗ್ಗೆ ಹಾಗೂ ಬಿಡಾರುವಾರ ಪತ್ರವನ್ನು ವ್ಯವಸ್ಥೆ ಮಾಡುವ ಬಗ್ಗೆ ನಮಗೆ ಆಧಾರಗಳು ಸಿಗುತ್ತವೆ.[21]

ಇಲ್ಲಿ ಹೆಚ್ಚು ಗಮನಿಸಬೇಕಾದ ಅಂಶವೆಂದರೆ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದಲ್ಲಿ ಆರುವಾರಕೆ ಸಿಕ್ಕಿದಷ್ಟು ಉಲ್ಲೇಖಗಳು, ಜಿಲ್ಲೆಯ ದಕ್ಷಿಣ ಭಾಗದಲ್ಲಿ ಸಿಗುವುದಿಲ್ಲ. ಮೂಡಬಿದರೆಯ ಶಾಸನಗಳಲ್ಲಿ ಆರುವಾರ ಹಾಗೂ ಅದರ ವಿವಿಧ ವಿಧಗಳ ಬಗ್ಗೆ ಅನೇಕ ಉಪ

---

14 Bhat Gururaja P. *Studies in Tuluva History and Culture* (Kallianpur 1975) p. 203
15 S.I.I. vol IX pt II No. 525
16 Ramesh K.V. *AHOSK* (Dharwar 1970) p. 279
17 SII vol VII No. 368
18 SII vol IX pt II No. 517
19 SII vol VII No. 390
20 *Ibid* No 355
21 SII vol IX Pt II No. 655

ಹರಣೆಗಳು ಸಿಗುತ್ತವೆ.[22] ಮೂಡಬಿದರೆ ಪ್ರದೇಶದ ಹೆಚ್ಚಿನ ಶಾಸನಗಳು ಹಣ ಸಾಲ ಪಡೆಯಲು ಕಾರಣ ವನ್ನು ತಿಳಿಸುತ್ತಾ ಮದುವೆಗಾಗಿ ಹಣ ಸಾಲ ಪಡೆದು ಕೊಂಡ ವಿಷಯವನ್ನು ತಿಳಿಸುತ್ತವೆ.[23]

ಆರುವಾರ ಅಡವು ಪದ್ಧತಿ ಭೂ ಪರಭಾರೆಗೆ ಒಂದು ಕಾರಣವಾಗಿತ್ತು. ಅದೇ ರೀತಿಯಲ್ಲಿ ತಾತ್ಕಾಲಿಕ ಭೂ ಒಡೆತನವು ಭೂ ಉತ್ಪತ್ತಿಯ ಮೇಲೆ ಪ್ರಭಾವ ಬೀರಿತು. ಅಂದರೆ ಸ್ವಲ್ಪ ಸಮಯದ ಮಟ್ಟಿಗೆ ಭೂಮಿಯ ಒಡೆತನವನ್ನು ಪಡೆದ ವ್ಯಕ್ತಿಗಳು ಅದರ ಅಭಿವೃದ್ಧಿಯಲ್ಲಿ ಯಾವ ಆಸಕ್ತಿಯನ್ನೂ ತೋರಿಸುವ ಸಾಧ್ಯತೆ ಇರಲಿಲ್ಲ.

ಇನ್ನೊಂದು ವಿಷಯವೆಂದರೆ ತುಂಬಾ ಹಣವಿದ್ದವರು ದೊಡ್ಡ ದೊಡ್ಡ ಭೂಮಾಲಿಕರಾಗುವುದು ಇದರಿಂದ ಸಾಧ್ಯವಾಯಿತು. ಇದು ಸಮಾಜದಲ್ಲಿ ಅವರ ಸ್ಥಾನ ಮಾನವನ್ನು ಹೆಚ್ಚಿಸಿತು. ಈ ಒಂದು ಅಡವು ಪದ್ಧತಿ ಪ್ರಚಲಿತವಿದ್ದುದರಿಂದ ಜನರಿಗೆ ಕುಟುಂಬದ ಅನೇಕ ಸಮಾರಂಭಗಳಿಗೆ ಹಣವನ್ನು ಪಡೆಯುವುದು ಸಾಧ್ಯ ವಾಯಿತು. ಒಟ್ಟಿನಲ್ಲಿ ಆರುವಾರ ಪದ್ಧತಿ ಸಮಾಜದಲ್ಲಿ ಜನರ ಸ್ಥಾನಮಾನ ಭೂ ಉತ್ಪತ್ತಿ ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತ್ತು.

---

22 Mudabidre copper plate Inscription No. 7. dated 1389 A. D (In the possession of Swamiji of Jaina Mutt, Mudabidre)

23 (i) Mudabidre Inscription No. 3
(ii) Copper plate Inscriptions of Lalitha Devi, Karnataka Bharati Samputa 17, Sanclike 3. January 1985.

* ಈ ಪ್ರಬಂಧ ತಯಾರಿಯಲ್ಲಿ ಸಹಕರಿಸಿದ ಡಾ॥ ಬಿ. ವಸಂತಶೆಟ್ಟಿ ಪ್ರಾಂಶುಪಾಲರು ಎಸ್.ಎಂ.ಎಸ್. ಕಾಲೇಜು, ಬ್ರಹ್ಮಾವರ, ದ.ಕ. ಅವರಿಗೆ ಕೃತಜ್ಞತೆಗಳು.